ಡಾ॥ ಎಂ. ಚಿದಾನಂದಮೂರ್ತಿ

# ಸಮ್ಮೇಳನದ ಅಧ್ಯಕ್ಷರ ಭಾಷಣ*

೧. ಇತಿಹಾಸದ ಅಧ್ಯಯನದಲ್ಲಿ ಮೂಲಭೂತವಾಗಿ ಆಗಬೇಕಾದ್ದು–ಸಾಮಗ್ರಿ ಸಂಗ್ರಹಣೆ. ಈ ದಿಸೆಯಲ್ಲಿ ಹಳೆಯ ಮೈಸೂರಿನ ಶಾಸನಗಳು, 'ಎಪಿಗ್ರಾಫಿಯ ಕರ್ನಾಟಿಕ' ಹೆಸರಿನ ಸಂಪುಟಗಳಲ್ಲಿ ಪ್ರಕಟವಾಗಿ ಈಗ ಪುನರ್ಮುದ್ರಣಗೊಂಡು ಜಿಲೆಗೂ ದೊರಕುತ್ತಿವೆ. ಉತ್ತರಕರ್ನಾಟಕದ ಶಾಸನಗಳು ಬೇರೆ ಬೇರೆ ಕಡೆ ಚೆದರಿದಂತೆ ಪ್ರಕಟವಾಗಿವೆ. ಕೆಲವು ಕಡೆ ಸರಿಯಾಗಿ ಸಮೀಕ್ಷೆಯೂ ನಡೆದಿಲ್ಲ. ಸಮೀಕ್ಷೆ ನಡೆದು ಆ ಎಲ್ಲ ಶಾಸನಗಳು ಎಪಿಗ್ರಾಫಿಯ ಕರ್ನಾಟಿಕಾ ಮಾದರಿಯಲ್ಲಿ ಪ್ರಕಟಗೊಳ್ಳುವುದು ತೀರ ಅಗತ್ಯ ವಾಗಿದೆ. ಕರ್ನಾಟಕ ಸರ್ಕಾರವು ಅಂತಹ ಯೋಜನೆಯನ್ನು ಕೈಗೆತ್ತಿಕೊಳ್ಳಬೇಕು. ಯುವ ಸಂಶೋಧಕರು ಕಡತ, ಕಾಗದ ಪತ್ರಗಳಂತಹ ದಾಖಲೆಗಳನ್ನು ಸಂಗ್ರಹಿಸುವ ಮನಸ್ಸು ಮಾಡಬೇಕು. ಕರ್ನಾಟಕ ರಾಜ್ಯ ಪತ್ರಾಗಾರದ ಚಟುವಟಿಕೆಗಳು ತೀವ್ರಗೊಳ್ಳುವುದು ಅಗತ್ಯವಾಗಿದೆ.

೨. ಕರ್ನಾಟಕದ ಚರಿತ್ರೆಯನ್ನು ಬರೆಯುವವರು ಶಾಸನ, ತಾಮ್ರಪಟ, ಕಾಗದದ ದಾಖಲೆಗಳಂತೆಯೇ, ಹಸ್ತಪ್ರತಿಗಳ ಲಿಪಿಕಾರರು ಹೇಳಿಕೊಂಡಿರುವ ಎಷ್ಟೋ ಅಮೂಲ್ಯ ವಿಷಯಗಳತ್ತ ಗಮನ ಕೊಡುವುದು ಅಗತ್ಯ. ಅನೇಕ ಹಸ್ತಪ್ರತಿಗಳ ಲಿಪಿಕಾರರು ಸ್ತ್ರೀಯರು. ಎಷ್ಟೋ ಪುರುಷರು ತಮ್ಮ ಹೆಣ್ಣು ಮಕ್ಕಳಿಗಾಗಿ ಹಸ್ತಪ್ರತಿಗಳನ್ನು ಬರೆಸಿದ್ದಾರೆ. ಪ್ರಾಚೀನ ಕರ್ನಾಟಕವು ಸ್ತ್ರೀ ವಿದ್ಯಾಭ್ಯಾಸದ ಕಡೆ ಗಮನವನ್ನು ಕೊಟ್ಟಿತ್ತೆಂಬುದಕ್ಕೆ ಇವು ಸಾಕ್ಷಿ.

೩. ಕನ್ನಡಿಗರ ಬಹುಮುಖ ಜೀವನವನ್ನು ಹಿಂದಿನ ಸಾಹಿತ್ಯವು ತನ್ನದೇ ಆದ ರೀತಿಯಲ್ಲಿ ಹಿಡಿದಿಟ್ಟಿದೆ. ಸಂಗೀತ, ನರ್ತನ, ಚಿತ್ರ ಮೊದಲಾದ ಲಲಿತಕಲೆಗಳು, ಬೇರೆ ಬೇರೆ ವರ್ಗದ ಜನರ ಬದುಕು, ನಂಬಿಕೆಗಳು, ಎಷ್ಟೋ ರಾಜಕೀಯ ವಿವರಗಳು ಸಾಹಿತ್ಯದಲ್ಲಿ ಬಂದಿವೆ. ಐತಿಹಾಸಿಕ ಕಾವ್ಯಗಳೇ ಹುಟ್ಟಿವೆ. ಅವನ್ನೆಲ್ಲ ಬಳಸಿಕೊಳ್ಳುವುದು ಅಗತ್ಯ. ಜನ್ನನಲ್ಲಿ "ನಿನಗಾ ಧರ್ಮದ ಪೋದ ಪೋಂಬದು ನರ್ಮದೆಯಿಂ ಗೆಂಟು" ಎಂಬ ಮಾತು ಬರುತ್ತದೆ. (ನಿನಗೆ ಧರ್ಮ ಮಾರ್ಗವೆಂಬುದೇ ನರ್ಮದೆಗಿಂತ ದೂರ). ನರ್ಮದಾ ನದಿಯು ಏಳನೇ ಶತಮಾನದಿಂದ ಮುಂದಿನ ಆರುನೂರು ವರ್ಷ ಕನ್ನಡಿಗ ಚಕ್ರವರ್ತಿಗಳ ಸಾಮ್ರಾಜ್ಯಗಳ ಮೇರೆಯಾಗಿತ್ತು. ಅಂದಿನ ಕನ್ನಡಿಗರಿಗೆ ತಮ್ಮ ಸಾಮ್ರಾಜ್ಯದ ವಿಸ್ತಾರದ ಅರಿವಿತ್ತು. ಕನ್ನಡ ಭಾಷೆ ಗೋದಾವರಿಯವರೆಗೆ ಹಬ್ಬಿತ್ತು ಎಂದು ಕವಿರಾಜಮಾರ್ಗದಲ್ಲಿ ಹೇಳಿದೆ. ಗೋದಾವರಿ, ನರ್ಮದಾ ನದಿಗಳ ಪ್ರಾಂತದಲ್ಲಿ ಶಾಸನ, ಹಸ್ತಪ್ರತಿ, ಕನ್ನಡ ಸ್ಥಳನಾಮಗಳು, ಕನ್ನಡ ಮಾತನಾಡುವ ಜನ, ಜಾನಪದ ಈ ದೃಷ್ಟಿಗಳಿಂದ ಸಂಶೋಧನೆ ಆಗಬೇಕಾಗಿದೆ.

* ಸಾರಾಂಶ

೪. ಇತಿಹಾಸ ಸಾಮಗ್ರಿ ಸಂಗ್ರಹಣೆ ನಡೆದಷ್ಟು, ಅದನ್ನು ಬಳಸಿಕೊಂಡು ಮಾಡಬೇಕಾದ ವ್ಯಾಖ್ಯಾನ, ವಿಮರ್ಶೆ, ಪುನರ್ ರಚನೆಗಳ ಕಾರ್ಯ ನಡೆದಿಲ್ಲ. ವಿದ್ವಾಂಸರೊಬ್ಬರು ಉದ್ಗಾರ ತೆಗೆದಂತೆ, "ನಾವು ಇಟ್ಟಿಗೆ ತಯಾರು ಮಾಡುವವರಾಗಿದ್ದೇವೆಯೇ ಹೊರತು ವಾಸ್ತುಶಿಲ್ಪಿಗಳಂತೆ ಕಟ್ಟಡ ನಿರ್ಮಾತರಾಗಿಲ್ಲ." ರಾಜರ ಬಗ್ಗೆ, ಆಡಳಿತದ ಬಗ್ಗೆ, ಕಲೆಗಳ ಬಗ್ಗೆ, ಆಂದೋಲನಗಳ ಬಗ್ಗೆ, ಇತರ ಹತ್ತಾರು ವಿಷಯಗಳ ಬಗ್ಗೆ ಚರ್ಚೆಗಳಾಗಿವೆ, ಬಿಡಿ ಲೇಖನಗಳು ಬಂದಿವೆ, ಪುಸ್ತಿಕೆಗಳು ಬಂದಿವೆ. ಕರ್ನಾಟಕದ ಸಮಗ್ರ ಚರಿತ್ರೆಯನ್ನು ಅದರ ಆಳ ಅಗಲಗಳಲ್ಲಿ ಕಟ್ಟಿಕೊಡುವ ಕೃತಿ ಇನ್ನೂ ಬಂದಿಲ್ಲ. ಡಾ॥ ಪಿ. ಬಿ. ದೇಸಾಯಿ, ಡಾ॥ ಗೋಪಾಲ್, ಡಾ॥ ರಿತ್ತಿಯವರು ಬರೆದ 'ಎ ಹಿಸ್ಟರಿ ಆಫ್ ಕರ್ನಾಟಕ', ಕರ್ನಾಟಕ ಸರ್ಕಾರದ 'ಕರ್ನಾಟಕ ಪರಂಪರೆ ೧, ೨' ಇವೆಲ್ಲ ಒಳ್ಳೆಯ ಪ್ರಯತ್ನಗಳು ನಿಜ. ಕರ್ನಾಟಕ ಸಂಸ್ಕೃತಿಯನ್ನು ಅದರ ಸಮಗ್ರತೆಯನ್ನು ನಿರೀಕ್ಷಿಸುವವರಿಗೆ ಅವು ತೃಪ್ತಿ ಕೊಡುತ್ತವೆ ಎನ್ನಲಾರೆ. ನಾವಿನ್ನು ಬಿಡಿ ಬಿಡಿ ಅಧ್ಯಯನಗಳನ್ನೇ ಸಮರ್ಪಕವಾಗಿ ಪೂರೈಸಿಲ್ಲವೆನ್ನುವ ಮಾತು ನಿಜ. ಪ್ರತ್ಯೇಕ ರಾಜಮನೆತನಗಳು, ಚಿಕ್ಕ ಚಿಕ್ಕ ರಾಜಮನೆತನಗಳು, ಸಾಂಸ್ಕೃತಿಕ ಕೇಂದ್ರಗಳು ಇವುಗಳ ವರ್ಣನಾತ್ಮಕ ಸಮೀಕ್ಷೆಗಳು ನಡೆದಿಲ್ಲ. ಕರ್ನಾಟಕದ ಚರಿತ್ರೆಯೇನೋ ಸಂಶೋಧಕರಿಗೆ ಸ್ವರ್ಗ. ಕೈಯಿಟ್ಟಲ್ಲಿ ಚಿನ್ನ ಸಿಗುತ್ತದೆ. ಕ್ಷೇತ್ರಕಾರ್ಯವನ್ನು ಮಾಡುವವರಿಗಂತೂ ನಿರಾಸೆ ಎಂಬುದಿಲ್ಲ.

೫. ಶ್ರಮ–ವ್ಯವಸ್ಥಿತ ಶ್ರಮಕ್ಕೆ ನಾವು ಸಿದ್ಧರಾಗುವುದೊಂದೇ ಇತಿಹಾಸ ಸಂಶೋಧಕರಾಗಲು ಏಕೈಕ ಮಾರ್ಗ. ಇತಿಹಾಸದ ಮೇಲಿನ ಪ್ರೀತಿ ನಮ್ಮ ಕಾರ್ಯದಲ್ಲಿ ಉತ್ಸಾಹವನ್ನು ತುಂಬಿದರೆ ಕರ್ನಾಟಕದ ಮೇಲಿನ ಪ್ರೀತಿ ಅದರಲ್ಲಿ ಶ್ರದ್ಧೆಯನ್ನು ಮೂಡಿಸುತ್ತದೆ. ಸಂಶೋಧನೆ ಎನ್ನುವುದೊಂದು ಶ್ರೇಷ್ಠ ಅನುಭವ.

೬. ಕನ್ನಡಿಗರಲ್ಲಿ ತಮ್ಮ ನಾಡು, ನುಡಿಗಳ ಬಗ್ಗೆ ಇರುವ ನಿರಭಿಮಾನವನ್ನು ಹೋಗಲಾಡಿಸಲು ತಮ್ಮ ಇತಿಹಾಸದ ಬಗ್ಗೆ ಅರಿವನ್ನು ಮೂಡಿಸುವುದೊಂದೇ ಮಾರ್ಗ. ಪುಲಿಕೇಶಿ, ವಿನಯಾದಿತ್ಯ, ನೃಪತುಂಗ, ಮೂರನೆಯ ಕೃಷ್ಣ, ಆರನೆಯ ವಿಕ್ರಮಾದಿತ್ಯ, ವಿಷ್ಣುವರ್ಧನ, ವೀರಬಲ್ಲಾಳ, ಕೃಷ್ಣದೇವರಾಯರಂತಹ ದೊರೆಗಳ, ಅತ್ತಿಮಬ್ಬೆ, ಬಸವೇಶ್ವರ, ಪುರಂದರದಾಸರಂತಹ ಧಾರ್ಮಿಕ ವ್ಯಕ್ತಿಗಳ, ಕವಿಗಳ ಕಲಾವಿದರ ಬಗ್ಗೆ ಹೆಚ್ಚು ಹೆಚ್ಚು ಜನಪ್ರಿಯ ಬರಹಗಳು ಬರಬೇಕು. ಇತಿಹಾಸ ಜನರನ್ನು ಉತ್ತೇಜಿಸುತ್ತದೆ. ತಮ್ಮ ಉಜ್ವಲ ಪರಂಪರೆಯನ್ನು ಉಳಿಸಿಕೊಳ್ಳುವುದರ ಜೊತೆ ಮುಂದಿನ ಸುಖಮಯ ಭವಿಷ್ಯದತ್ತ ಉತ್ಸಾಹದಿಂದ ಹೆಜ್ಜೆ ಹಾಕಲು ಸಹಾಯ ಮಾಡುತ್ತದೆ. ಪುಣ್ಯಭೂಮಿ ಕರ್ನಾಟಕ ತನ್ನ ಕಳೆದ ನಾಲ್ಕುನೂರು ವರ್ಷಗಳಲ್ಲಿ ಬಹುಪಾದ ನೆಲಗಳನ್ನು ಕಳೆದುಕೊಂಡಿದೆ. ಈ ಐತಿಹಾಸಿಕ ಕಟುಸತ್ಯ ಇಂದಿನ ವಾಸ್ತವಗಳಿಗೆ ಕಣ್ಣು ತೆರೆಸಬೇಕು. ಇಂದಿನ ಸಮಕಾಲೀನ ಮುಂದಿನ ಚರಿತ್ರೆ. ಬೆಂಗಳೂರಿನಂತಹ ನಗರ ಪ್ರದೇಶಗಳಿಗೆ ಮಿತಿಮೀರಿದ ಅನ್ಯ ಭಾಷೀಯರ ವಲಸೆ ನಡೆದು ಕನ್ನಡಿಗ ದಿಕ್ಕು ತೋಚದಂತಾಗಿದ್ದಾನೆ. ಕರ್ನಾಟಕದ ವ್ಯಾಪಾರ ಉತ್ತರದ ವ್ಯಾಪಾರಿಗಳ ಕೈಗೆ ಹೋಗಿದೆ. ಪ್ರಬಲ ಮಾಧ್ಯಮಗಳ ಮೂಲಕ ಹಿಂದಿ, ಶಿಕ್ಷಣದ ಮೂಲಕ ಇಂಗ್ಲೀಷ್ ಕನ್ನಡವನ್ನು ಮೂಲೆಗುಂಪಾಗಿಸಿವೆ. ಈ ಹಿನ್ನೆಲೆಯಲ್ಲಿ ಮುಂದಿನ ಶತಮಾನದ ಕನ್ನಡಿಗನ ಭವಿಷ್ಯವೇನು ? ಅಂದಿನ ಚರಿತ್ರೆಕಾರ ಇಂದು ಕರ್ನಾಟಕದ ಮೇಲೆ ನಡೆಯುತ್ತಿರುವ ಬಗೆ ಬಗೆಯ ಧಾಳಿ, ಆಕ್ರಮಣಗಳ ಬಗ್ಗೆ ಏನು ಬರೆಯುತ್ತಾನೆ ? ಊಹಿಸಿಕೊಳ್ಳಬಹುದು. ಚರಿತ್ರೆಯಿಂದ ನಾವು ಪಾಠ ಕಲಿಯುವುದು ಸಾಕಷ್ಟಿದೆ.

೭. ಕರ್ನಾಟಕವನ್ನು ಮುಸುಕಿರುವ ಮಬ್ಬನ್ನು ಹೊಡೆದೋಡಿಸುವಲ್ಲಿ ಇತಿಹಾಸಕಾರರ ಪ್ರಮುಖ ಪಾತ್ರವಿದೆ. ಕನ್ನಡಿಗರ ಸ್ವಸ್ವರೂಪ ಜ್ಞಾನೋದಯ ಕಾರ್ಯದಲ್ಲಿ ಇತಿಹಾಸಕಾರರು ಶ್ರೀ ಕೃಷ್ಣ ಪರಮಾತ್ಮರಾಗಬೇಕು.